# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1239

ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ.ಎಂ (ವಿಧಾನ ಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 07-03-2022

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

***

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಾರ್ವಜನಿಕರಿಂದ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯುತ್ ಚಾಲಿತ ವಾಹನಗಳನ್ನು ಖರೀದಿಸಲಾಗುತ್ತಿದ್ದು, ವಿದ್ಯುತ್ ಚಾಲಿತ ವಾಹನಗಳ ಬಳಕೆಗೆ ಎಲೆಕ್ಟ್ರಿಕ್ ಚಾರ್ಜಿಂಗ್ ಸ್ಟೇಷನ್‌ಗಳನ್ನು ಸ್ಥಾಪಿಸುವ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಸಾರ್ವಜನಿಕರಿಂದ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯುತ್ ಚಾಲಿತ ವಾಹನಗಳನ್ನು ಖರೀದಿಸಲಾಗುತ್ತಿದ್ದು, ವಿದ್ಯುತ್ ಚಾಲಿತ ವಾಹನಗಳ ಬಳಕೆಗೆ ಎಲೆಕ್ಟ್ರಿಕ್ ಚಾರ್ಜಿಂಗ್ ಸ್ಟೇಷನ್ ಗಳನ್ನು ಸ್ಥಾಪಿಸುವ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದ್ದು ವಿವರಗಳು ಈ ಕೆಳಗಿನಂತಿವೆ:-<br>• ಭಾರತ ಸರ್ಕಾರದ ಫೇಮ್-2 ಯೋಜನೆಯಡಿ ರಾಜ್ಯಕ್ಕೆ 172 ಹಾಗೂ ಅದರಲ್ಲಿ ಬೆಂಗಳೂರು ನಗರಕ್ಕೆ 152, ಮಂಗಳೂರು ನಗರಕ್ಕೆ 10 ಮತ್ತು ಕಲಬುರ್ಗಿ ನಗರಕ್ಕೆ 10 ವಿದ್ಯುತ್ ವಾಹನ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು ಅನುಮೋದನೆ ನೀಡಿದೆ. ಸದರಿ ಇವಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು, ಎನ್‌ಟಿಪಿಸಿ ಲಿಮಿಟೆಡ್ ಮತ್ತು ರಾಜಸ್ಥಾನ ಎಲೆಕ್ಟ್ರಾನಿಕ್ಸ್ & ಇನ್ ಸ್ಟ್ರುಮೆಂಟ್ಸ್ ಲಿಮಿಟೆಡ್ ಜೊತೆ ಬೆವಿಕಂ MoU ಕಾರ್ಯಗತಗೊಳಿಸಿದೆ.<br>• ಮುಂದುವರೆದು, 17 ಬೆಸ್ಕಾಂ ಸ್ಥಳಗಳಲ್ಲಿ ರಾಜ್ಯದ ಹೆದ್ದಾರಿಗಳಲ್ಲಿ ಇವಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು Energy Efficiency Services Limited (EESL) ಗೆ ಒಪ್ಪಿಗೆ ನೀಡಿದೆ.<br>• ಕರ್ನಾಟಕ ಸರ್ಕಾರವು ತನ್ನ 2021 ರ ಬಜೆಟ್ ನಲ್ಲಿ ಪಿಪಿಪಿ ಆಧಾರದ ಮೇಲೆ ರಾಜ್ಯದಲ್ಲಿ 1000 ಇವಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸುವುದಾಗಿ ಘೋಷಿಸಿದೆ. ಬೆಸ್ಕಾಂ ರಾಜ್ಯ ನೋಡಲ್ ಏಜೆನ್ಸಿಯಾಗಿದ್ದು 1190 ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು ಕ್ರಿಯಾ ಯೋಜನೆ ಮತ್ತು ಪ್ರಮಾಣಿತ ಬಿಡ್ಡಿಂಗ್ ದಾಖಲೆಗಳನ್ನು ಸಿದ್ಧಪಡಿಸಿದೆ. ಸದರಿ ಚಾರ್ಜಿಂಗ್ ಕೇಂದ್ರಗಳನ್ನು ಸ್ಥಾಪಿಸಲು ಸ್ಥಳ ಗುರುತಿಸಲು ಸರ್ಕಾರದ ವತಿಯಿಂದ ಎಲ್ಲಾ ಇಲಾಖೆಗಳಿಗೆ, ಜಿಲ್ಲಾಧಿಕಾರಿಗಳಿಗೆ ಸೂಚನೆಗಳನ್ನು ಜಾರಿಗೊಳಿಸಿದ್ದು, ಇಲ್ಲಿಯವರೆಗೂ 645 ಸ್ಥಳಗಳನ್ನು ರಾಜ್ಯಾದ್ಯಂತ ಗುರುತಿಸಲಾಗಿದೆ.<br>• ಬೆಂಗಳೂರು ವಿದ್ಯುತ್ ಕಂಪನಿ ವತಿಯಿಂದ 10 ಚಾರ್ಜಿಂಗ್ ಪಾಯಿಂಟ್ ಗಳು ಹಾಗೂ ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರದ ರೂ.4.00 ಕೋಟಿ ಅನುದಾನದಲ್ಲಿ 126 ಚಾರ್ಜಿಂಗ್ ಪಾಯಿಂಟ್ ಗಳೊಂದಿಗೆ 2018ರಿಂದ ಇಲ್ಲಿಯವರೆಗೆ ಬೆಂಗಳೂರು ನಗರದಲ್ಲಿ ಒಟ್ಟಾರೆಯಾಗಿ 136 ಚಾರ್ಜಿಂಗ್ ಪಾಯಿಂಟ್ ಗಳನ್ನು ಸ್ಥಾಪಿಸಲಾಗಿದೆ. |

| | | |
|---|---|---|
| | | ಕರ್ನಾಟಕ ಸರ್ಕಾರದ ದಿ:28.12.2018 ರ ಪತ್ರದನ್ವಯ ಬೆಂಗಳೂರು ವಿದ್ಯುತ್ ಕಂಪನಿಯನ್ನು ರಾಜ್ಯದಲ್ಲಿ ವಿದ್ಯುತ್ ವಾಹನ ಚಾರ್ಜಿಂಗ್ ಕೇಂದ್ರಗಳ ಮೂಲ ಸೌಕರ್ಯಗಳನ್ನು ಸ್ಥಾಪಿಸಲು ನೋಡಲ್ ಏಜೆನ್ಸಿಯನ್ನಾಗಿ ನೇಮಿಸಿದೆ. |
| ಆ) | ಎಲೆಕ್ಟ್ರಿಕ್ ಚಾರ್ಜಿಂಗ್ ಸ್ಟೇಷನ್‌ಗಳನ್ನು ಖಾಸಗಿಯವರು ಅವರ ಸ್ವಂತ ಜಾಗದಲ್ಲಿ ಸ್ಥಾಪಿಸಲು ಆಸಕ್ತಿ ತೋರಿದ್ದಲ್ಲಿ ಅಂತಹವರಿಗೆ ಸರ್ಕಾರದ ವತಿಯಿಂದ ಯಾವ ರೀತಿಯಲ್ಲಿ ಪ್ರೋತ್ಸಾಹ ನೀಡಲಾಗುತ್ತಿದೆ; | ಕರ್ನಾಟಕ ವಿದ್ಯುತ್ ವಾಹನ ಮತ್ತು ಶಕ್ತಿ ಸಂಗ್ರಹಣೆ ನೀತಿ-2017ರ ಅಡಿಯಲ್ಲಿ ಈ ಕೆಳಕಂಡಂತೆ ಪ್ರೋತ್ಸಾಹ/ಸಹಾಯಧನ ನಿಗಧಿಪಡಿಸಲಾಗಿದೆ.<br><br>ವಿದ್ಯುತ್ ಚಾಲಿತ ದ್ವಿ-ಚಕ್ರ, ತ್ರಿ-ಚಕ್ರ, ಕಾರು ಮತ್ತು ಬಸ್ ಗಳಿಗೆ ತ್ವರಿತ ಚಾರ್ಜಿಂಗ್ ಕೇಂದ್ರಗಳನ್ನು ಅಳವಡಿಸಲು. — ಪ್ರತಿ ವಿದ್ಯುತ್ ಚಾಲಿತ ವಾಹನಗಳ ಚಾರ್ಜಿಂಗ್ ಕೇಂದ್ರಗಳ ಉಪಕರಣಗಳು / ಯಂತ್ರೋಪಕರಣಗಳ ಮೇಲೆ 25% ರಷ್ಟು ಬಂಡವಾಳ ಸಬ್ಸಿಡಿಯನ್ನು ರೂ. 10 ಲಕ್ಷಕ್ಕೆ ಸೀಮಿತಗೊಳಿಸಿ ಮೊದಲ 500 ತ್ವರಿತ ಚಾರ್ಜಿಂಗ್ ಕೇಂದ್ರಕ್ಕೆ ನೀಡಲಾಗುವುದು. |
| ಇ) | ಖಾಸಗಿಯವರು ಸ್ಥಾಪಿಸುವ ಎಲೆಕ್ಟ್ರಿಕ್ ಚಾರ್ಜಿಂಗ್ ಸ್ಟೇಷನ್‌ಗಳಿಗೆ ಸರಬರಾಜು ಮಾಡುವ ವಿದ್ಯುಚ್ಛಕ್ತಿಗೆ ವಿಧಿಸಲಾಗುತ್ತಿರುವ ದರ ಎಷ್ಟು; | ವಿದ್ಯುತ್ ವಾಹನ ಚಾರ್ಜಿಂಗ್ ಕೇಂದ್ರಗಳ ಸ್ಥಾಪನೆಯನ್ನು ಪ್ರೋತ್ಸಾಹಿಸಲು ವಿಶೇಷ ಜಕಾತಿ LT-6C ಅಡಿಯಲ್ಲಿ ವಿದ್ಯುತ್ ಸರಬರಾಜು ದರ ಪ್ರತಿ ಯೂನಿಟ್ ಗೆ ರೂ. 5/- ಹಾಗೂ ಮಾಸಿಕ ನಿಗದಿತ ಶುಲ್ಕ ರೂ.70/kW (ಎಲ್.ಟಿ) ಮತ್ತು ರೂ.200/kVA (ಎಚ್.ಟಿ) ರಂತೆ ನಿಗದಿಪಡಿಸಲಾಗಿದೆ. |
| ಈ) | ವಿದ್ಯುತ್ ಚಾಲಿತ ವಾಹನಗಳ ಖರೀದಿಗೆ ಸರ್ಕಾರದ ವತಿಯಿಂದ ಸಹಾಯಧನ ನೀಡಲಾಗುತ್ತಿದೆಯೇ; | ಕೇಂದ್ರ ಸರ್ಕಾರದ Fame India Phase – II ಯೋಜನೆಯಡಿಯಲ್ಲಿ ಭಾರಿ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ಯಮಗಳ ಸಚಿವಾಲಯದ ಅಧಿಸೂಚನೆ ಸಂ.ಎಸ್.ಓ 1300 (ಇ), ದಿನಾಂಕ:08-03-2019ರಲ್ಲಿ ಭಾರತದಾದ್ಯಂತ ಎಲೆಕ್ಟ್ರಿಕ್ ವಾಹನಗಳನ್ನು ಖರೀದಿಸುವವರಿಗೆ ವಾಹನ ತಯಾರಕರ ಮೂಲಕ ಸಹಾಯಧನ ನೀಡಲಾಗುತ್ತಿದೆ<br><br>ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಸಾರಿಇ 76 ಸಾಇಪ 2016, ಬೆಂಗಳೂರು, ದಿನಾಂಕ:31-03-2016 ರಲ್ಲಿ ಎಲ್ಲಾ ವರ್ಗದ ಎಲೆಕ್ಟ್ರಿಕ್ ವಾಹನಗಳಿಗೆ (ಇ-ಕಾರ್ಟ್ ಹಾಗೂ ಇ-ರಿಕ್ಷಾ ವಾಹನಗಳನ್ನೊಳಗೊಂಡಂತೆ) ದಿನಾಂಕ:01-04-2016 ರಿಂದ ಮೋಟಾರು ವಾಹನ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿರುತ್ತದೆ.<br><br>ಅಲ್ಲದೆ, ಕೇಂದ್ರ ಸರ್ಕಾರದ ಅಧಿಸೂಚನೆ ಸಂಖ್ಯೆ GSR 525 (E) ದಿನಾಂಕ:02-08-2021 ರಲ್ಲಿ ಬ್ಯಾಟರಿ ಚಾಲಿತ ಹೊಸ ವಾಹನಗಳ ನೋಂದಣಿ ಅಥವಾ ನೋಂದಣಿ ಪ್ರಮಾಣಪತ್ರ ನವೀಕರಣ ಮತ್ತು ಹೊಸ ನೋಂದಣಿ ಸಂಖ್ಯೆ ನೀಡುವ ವಾಹನಗಳಿಗೆ ಶುಲ್ಕ ಪಾವತಿಯಿಂದ ವಿನಾಯಿತಿ ನೀಡಲಾಗಿರುತ್ತದೆ.<br><br>ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಟಿಡಿ 2 ಟಿಡಿಓ 2019, ದಿನಾಂಕ:20-01-2022 ರಲ್ಲಿ ಬ್ಯಾಟರಿ ಚಾಲಿತ ಸಾರಿಗೆ ವಾಹನಗಳಿಗೆ ರಹದಾರಿ ವಿನಾಯಿತಿ ನೀಡಿ ಆದೇಶಿಸಲಾಗಿದೆ. |

| | | |
|---|---|---|
| | | ರಾಜ್ಯ ಸರ್ಕಾರದ ಆದೇಶ ಸಂಖ್ಯೆ ಟಿಡಿ 161 ಟಿಡಿಓ 2021, ದಿನಾಂಕ:14-01-2022 ರಲ್ಲಿ ಹಸಿರು ತೆರಿಗೆ ಸಂಗ್ರಹದಿಂದ ಲಭಿಸಿರುವ ಆದಾಯದ ಅನುದಾನದಲ್ಲಿ ಬೆಂಗಳೂರು ನಗರದಲ್ಲಿ ಹಳೆಯದಾದ 2 ಸ್ಟ್ರೋಕ್ ಆಟೋರಿಕ್ಷಾ, ಕ್ಯಾಬ್ ಗಳನ್ನು ಅನುಪಯುಕ್ತಗೊಳಿಸಿ ಹೊಸ ಎಲೆಕ್ಟ್ರಿಕ್ ಆಟೋರಿಕ್ಷಾ ಕ್ಯಾಬ್ ಗಳನ್ನು ಖರೀದಿಸಿದ್ದಲ್ಲಿ ಪ್ರತಿ ಆಟೋರಿಕ್ಷಾಗೆ ರೂ.60,000/- ಸಹಾಯಧನ ಒದಗಿಸಲು ಒಟ್ಟು ರೂ.10 ಕೋಟಿಗಳನ್ನು ಮೀಸಲಿರಿಸಲಾಗಿದ್ದು, ಅನುದಾನ ಬಿಡುಗಡೆಯ ಸಂಬಂಧ ಕ್ರಮ ಕೈಗೊಳ್ಳಲಾಗುತ್ತಿದೆ. |
| ಉ) | ಸರ್ಕಾರಿ ವಾಹನಗಳಲ್ಲಿ ಎಷ್ಟು ವಿದ್ಯುತ್ ಚಾಲಿತ ವಾಹನಗಳನ್ನು ಉಪಯೋಗಿಸಲಾಗುತ್ತಿದೆ; | ಮಾರ್ಚ್-2018ರಿಂದ ಈವರೆವಿಗೂ ಇಂಧನ ಇಲಾಖೆ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ಮತ್ತು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಕಾರ್ಯಾಲಯದಲ್ಲಿ ಒಟ್ಟು 5 ಸಂಖ್ಯೆಗಳ ವಿದ್ಯುತ್ ಚಾಲಿತ ವಾಹನಗಳನ್ನು ಬಳಸಲಾಗುತ್ತಿದೆ. ಇನ್ನುಳಿದಂತೆ ಸರ್ಕಾರಿ ವಾಹನಗಳಲ್ಲಿ ಯಾವುದೇ ವಿದ್ಯುತ್ ಚಾಲಿತ ವಾಹನಗಳನ್ನು ಉಪಯೋಗಿಸಲಾಗುತ್ತಿಲ್ಲ. |
| ಊ) | ಸರ್ಕಾರದ ಹಿರಿಯ ಅಧಿಕಾರಿಗಳ ಮತ್ತು ಸಚಿವರುಗಳ ಉಪಯೋಗಕ್ಕಾಗಿ ವಿದ್ಯುತ್ ಚಾಲಿತ ವಾಹನಗಳನ್ನು ಖರೀದಿಸುವ ಯೋಜನೆ ಇದೆಯೇ? | ಹಿರಿಯ ಅಧಿಕಾರಿಗಳಿಗೆ ಮತ್ತು ಸಚಿವರುಗಳ ಉಪಯೋಗಕ್ಕಾಗಿ ವಿದ್ಯುತ್ ಚಾಲಿತ ವಾಹನಗಳನ್ನು ಖರೀದಿಸುವ ಯೋಜನೆ ಇರುವುದಿಲ್ಲ. |

ಸಂಖ್ಯೆ: ಎನರ್ಜಿ 44 ಇಬಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು